

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಹೆಚ್.ಎಂ ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 751

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 25.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರೋನಾ ವೈರಸ್ ಸಂಕಷ್ಟದಿಂದ ಕೈಮಗ್ಗ ನೇಕಾರಿಕೆ ಮತ್ತು ಜವಳಿ ಉದ್ಯಮ ಅತ್ಯಂತ ಹೀನಾಯ ಸ್ಥಿತಿ ತಲುಪಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಚೇತರಿಕೆಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; | ಕರೋನಾ ವೈರಸ್ ನಿಂದ ಕೈಮಗ್ಗ ನೇಕಾರಿಕೆ ಮತ್ತು ಜವಳಿ ಉದ್ಯಮ ಸಂಕಷ್ಟದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ:-<br>• ಕೋವಿಡ್-19 ಮಹಾಮಾರಿ ಹಾಗೂ ಆರ್ಥಿಕ ಹಿನ್ನಡೆಯಿಂದ ಸಂಕಷ್ಟದಲ್ಲಿರುವ 4ನೇ ರಾಷ್ಟ್ರೀಯ ಕೈಮಗ್ಗ ಗಣತಿ ಪ್ರಕಾರ 54789 ಕೈಮಗ್ಗ ನೇಕಾರರಿಗೆ "ನೇಕಾರ ಸಮ್ಮಾನ್" ಯೋಜನೆಯಡಿ ಪ್ರತಿ ವರ್ಷ ಕೈಮಗ್ಗ ನೇಕಾರರಿಗೆ ರೂ.2000/-ಗಳ ಆರ್ಥಿಕ ನೆರವು ನೀಡಲಾಗುತ್ತಿದೆ.<br>• ರಾಜ್ಯದಲ್ಲಿರುವ 1.25 ಲಕ್ಷ ವಿದ್ಯುತ್ ಚಾಲಿತ ಘಟಕ(ಮಗ್ಗ)ಗಳಲ್ಲಿ ಕೆಲಸ ಮಾಡುತ್ತಿರುವ 1.25 ಲಕ್ಷ ಕೂಲಿ ಕೆಲಸಗಾರರಿಗೆ ರೂ.2000/-ಗಳ ಒಂದು ಬಾರಿಯ ಪರಿಹಾರಧನವನ್ನು ನೀಡಲಾಗುತ್ತಿದೆ.<br>• ನೇಕಾರರು ನೇಕಾರಿಕೆ ಉದ್ದೇಶಕ್ಕಾಗಿ ವಿವಿಧ ಸಹಕಾರ ಬ್ಯಾಂಕುಗಳಿಂದ ಮತ್ತು ಸಹಕಾರ ಸಂಘಗಳಿಂದ ಸಾಲ ಪಡೆದು ದಿನಾಂಕ:01.01.2019 ರಿಂದ 31.03.2019ರ ಅವಧಿಯೊಳಗೆ ಅಸಲು ಮತ್ತು ಬಡ್ಡಿ ಸೇರಿ ರೂ.1.00 ಲಕ್ಷಗಳವರೆಗೆ ತಮ್ಮ ಸಾಲವನ್ನು ಪಾವತಿಸಿರುವ ನೇಕಾರರಿಗೂ ಮರುಪಾವತಿ ಮಾಡಲಾಗುತ್ತಿದೆ. |
| ಆ) | ರಾಜ್ಯದಲ್ಲಿ ಗ್ರಾಮೀಣ ನೇಕಾರರು ಆರ್ಥಿಕ ಸಂಕಷ್ಟ ತಾಳಲಾರದೇ ತಮ್ಮ ಕೈಮಗ್ಗಗಳಿಗೆ ನೇಣು ಹಾಕಿಕೊಂಡು ಸಾವನ್ನಪ್ಪಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಅತಂತ್ರ ಸ್ಥಿತಿಯಲ್ಲಿರುವ ನೇಕಾರರ ಬದುಕು ಸುಧಾರಿಸಲು ಯಾವ ಕಾರ್ಯಕ್ರಮ ರೂಪಿಸಲಾಗಿದೆ; | ರಾಜ್ಯದಲ್ಲಿ ಗ್ರಾಮೀಣ ನೇಕಾರರು ಆರ್ಥಿಕ ಸಂಕಷ್ಟ ತಾಳಲಾರದೇ ಆತ್ಮಹತ್ಯೆಯಿಂದಾಗಿ ಸಾವನ್ನಪ್ಪಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ನೇಕಾರರ ಬದುಕು ಸುಧಾರಿಸಲು ಈ ಕೆಳಕಂಡ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ:-<br>• ರಾಜ್ಯದಲ್ಲಿರುವ 54789 ಕೈಮಗ್ಗ ನೇಕಾರರಿಗೆ "ನೇಕಾರ ಸಮ್ಮಾನ್" ಯೋಜನೆಯಡಿ ಪ್ರತಿ ವರ್ಷ ಕೈಮಗ್ಗ ನೇಕಾರರಿಗೆ ರೂ.2000/-ಗಳ ಆರ್ಥಿಕ ನೆರವು ನೀಡಲಾಗುತ್ತಿದೆ.<br>• ರಾಜ್ಯದಲ್ಲಿರುವ 1.25 ಲಕ್ಷ ವಿದ್ಯುತ್ ಚಾಲಿತ ಘಟಕ(ಮಗ್ಗ)ಗಳಲ್ಲಿ ಕೆಲಸ ಮಾಡುತ್ತಿರುವ 1.25 ಲಕ್ಷ ಕೂಲಿ ಕೆಲಸಗಾರರಿಗೆ ರೂ.2000/-ಗಳ ಒಂದು ಬಾರಿಯ ಪರಿಹಾರಧನವನ್ನು ನೀಡಲಾಗುತ್ತಿದೆ. |

| | | |
|---|---|---|
| | | • ನೇಕಾರರು ನೇಕಾರಿಕೆ ಉದ್ದೇಶಕ್ಕಾಗಿ ವಿವಿಧ ಸಹಕಾರ ಬ್ಯಾಂಕುಗಳಿಂದ ಮತ್ತು ಸಹಕಾರ ಸಂಘಗಳಿಂದ ಸಾಲ ಪಡೆದು ದಿನಾಂಕ:01.01.2019 ರಿಂದ 31.03.2019ರ ಅವಧಿಯೊಳಗೆ ಅಸಲು ಮತ್ತು ಬಡ್ಡಿ ಸೇರಿ ರೂ.1.00 ಲಕ್ಷಗಳವರೆಗೆ ತಮ್ಮ ಸಾಲವನ್ನು ಪಾವತಿಸಿರುವ ನೇಕಾರರಿಗೂ ಸಾಲಮನ್ನಾ ಮರುಪಾವತಿಯ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| ಇ) | ರಾಜ್ಯದ ಜವಳಿ ಉದ್ಯಮದ ಚೇತರಿಕೆಗೆ ಈವರೆಗೆ ಮೀಸಲಿಟ್ಟ ಹಣವೆಷ್ಟು; ಖರ್ಚಾದ ಹಣವೆಷ್ಟು; | ಪ್ರಸಕ್ತ ಸಾಲಿನಲ್ಲಿ ರಾಜ್ಯದ ಜವಳಿ ಉದ್ಯಮದ ಚೇತರಿಕೆಗೆ ಈ ಕೆಳಕಂಡಂತೆ ಯೋಜನೆಗಳನ್ನು ಅನುಷ್ಠಾನಗೊಳಿಸಿ ಅನುದಾನವನ್ನು ಮೀಸಲಿಡಲಾಗಿರುತ್ತದೆ:- |

| ಕ್ರ ಸಂ | ಯೋಜನೆ | ಪ್ರಸಕ್ತ ಸಾಲಿನಲ್ಲಿ ಹಂಚಿಕೆ ಮಾಡಿರುವ ಅನುದಾನ (ರೂ.ಲಕ್ಷಗಳಲ್ಲಿ) | ಅನುದಾನದ ವೆಚ್ಚ (ರೂ.ಲಕ್ಷಗಳಲ್ಲಿ) |
|---|---|---|---|
| 1 | ನೇಕಾರರ ವಿಶೇಷ ಪ್ಯಾಕೇಜ್ | 8400.00 | 2396.41 |
| 2 | ನೇಕಾರರ ಸಾಲ ಮನ್ನಾ | 7957.00 | 4264.57 |
| 3 | ನೂತನ ಜವಳಿ ಮತ್ತು ಸಿದ್ಧ ಉಡುಪು ನೀತಿ | 20100.00 | 11385.85 |
| 4 | ಅನುಸೂಚಿತ ಜಾತಿ ಮತ್ತು ಬುಡಕಟ್ಟು ಉಪ ಯೋಜನೆ ಯಡಿ ಬಳಕೆಯಾಗದೇ ಇರುವ ಅನುದಾನ | 41.00 | 0 |
| | ಒಟ್ಟು | **36498.00** | **18046.83** |

| | | |
|---|---|---|
| ಈ) | ಗ್ರಾಮೀಣ ನೇಕಾರರ ಉತ್ತೇಜನಕ್ಕೆ ಸರ್ಕಾರ ಆರ್ಥಿಕ ನೆರವಿನ ಪ್ಯಾಕೇಜ್ ಘೋಷಿಸಲಿದೆಯೇ; (ವಿವರ ನೀಡುವುದು) | ಗ್ರಾಮೀಣ ಪ್ರದೇಶದ ನೇಕಾರರ ಉತ್ತೇಜನಕ್ಕೆ ಸರ್ಕಾರವು ಈ ಕೆಳಕಂಡ ಆರ್ಥಿಕ ನೆರವಿನ ಪ್ಯಾಕೇಜ್ ಘೋಷಿಸಲಾಗಿದೆ:-<br>• ಕೋವಿಡ್-19 ಮಹಾಮಾರಿ ಹಾಗೂ ಆರ್ಥಿಕ ಹಿನ್ನಡೆಯಿಂದ ಸಂಕಷ್ಟದಲ್ಲಿರುವ 54789 ಕೈಮಗ್ಗ ನೇಕಾರರಿಗೆ "ನೇಕಾರರ ಸಮ್ಮಾನ್" ಯೋಜನೆಯಡಿ ಪ್ರತಿ ವರ್ಷ ಕೈಮಗ್ಗ ನೇಕಾರರಿಗೆ ರೂ.2000/- ಗಳ ಆರ್ಥಿಕ ನೆರವು ನೀಡಲು ಪ್ರಸಕ್ತ ಸಾಲಿಗೆ ರೂ.10.96 ಕೋಟಿಗಳ ಅನುದಾನವನ್ನು ನಿಗದಿಪಡಿಸಲಾಗಿದೆ.<br>• ರಾಜ್ಯದಲ್ಲಿರುವ 1.25 ಲಕ್ಷ ವಿದ್ಯುತ್ ಚಾಲಿತ ಘಟಕ (ಮಗ್ಗ)ಗಳಲ್ಲಿ ಕೆಲಸ ಮಾಡುತ್ತಿರುವ 1.25 ಲಕ್ಷ ಕೂಲಿ ಕೆಲಸಗಾರರಿಗೆ ರೂ.2.000/-ಗಳ ಒಂದು ಬಾರಿಯ ಪರಿಹಾರ ಧನವನ್ನು ನೀಡಲು ಪ್ರಸಕ್ತ ಸಾಲಿನಲ್ಲಿ ರೂ.25.00 ಕೋಟಿ ಅನುದಾನವನ್ನು ನಿಗದಿಪಡಿಸಲಾಗಿದೆ. |

ಸಂಖ್ಯೆ: CI 219 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು